# 10

# ಟಿಶ್ಯೂ ಔಷಧಗಳ ಕೈಪಿಡಿ

(A Handbook of Tissue Remedies)



ಬರೆದವರು:

ಶ್ರೀ। ಪಿ. ಎಸ್. ವೆಂಕಟಕೃಷ್ಣರಾವ್,

ಎಂ. ಎ., ಬಿ. ಟಿ.

ಮಂಗಳೂರು:

1954.




ಒಂದಾಣೆ ಮಾಲೆ

# 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವ ಕೆಲವು ವಿಷಯಗಳು

| | |
|---|---|
| ಸಣ್ಣ ಕತೆಗಳು | ಪ್ರಹಸನಗಳು |
| ನೀಳ್ಗತೆಗಳು | ಏಕಾಂಕ ನಾಟಕಗಳು |
| ವ್ಯಕ್ತಿ ಚಿತ್ರ | ದೇಶ-ವಿದೇಶ ಚರಿತ್ರೆ |
| ವಿಜ್ಞಾನ | ಚಿಕ್ಕ ನಿಘಂಟುಗಳು |
| ಶಿಲ್ಪ | ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳ ಉಪದೇಶ |
| ಲಲಿತಕಲೆ | ಸೃಷ್ಟಿಯ ವೈಚಿತ್ರ್ಯಗಳು |
| ಗೃಹವೈದ್ಯ | ಶೈಕ್ಷಣಿಕ ವಿಚಾರಗಳು |
| ಗೃಹಿಣಿಯರಿಗೆ | ಕ್ಷೇತ್ರಗಳ ವಿವರ |
| ಉಪಯುಕ್ತ ಸಲಹೆಗಳು | |
| ಸುಭಾಷಿತ | ವಾಙ್ಮಯ ವಿಚಾರ |
| ಪ್ರಯಾಣ ಕತೆಗಳು | ಸತ್ಯ ಕಥಾನಕಗಳು |

ಶ್ರೀ। ಕೋ. ಶ. ಕಾರಂತ, ಬಿ.ಎ., ಬಿ.ಎಲ್., ಶ್ರೀ। ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೊಕೇಟ್, ವೈದ್ಯಗುರು ಎಂ. ಆರ್. ಭಟ್, ದಿ। ಎಮ್. ಎನ್. ಕಾಮತ್, ಶ್ರೀ। ಪಿ. ಎಸ್. ವೆಂಕಟಕೃಷ್ಣ ರಾವ್, ಎಂ.ಎ., ಬಿ.ಟಿ., ಶ್ರೀ। ಎಮ್. ಸುಬ್ರಾಯನ್, ವಿದ್ವಾನ್, ಶ್ರೀ। ಕುಡ್ಪಿ ವಾಸುದೇವ ಶೆಣೈ, ಶ್ರೀ। ಎಲ್. ಎಸ್. ನಾಯಕ, ಡಾ। ಎಸ್. ಪಿ. ಭಟ್– ಮೊದಲಾದವರ ಲೇಖನಗಳು 'ಒಂದಾಣೆ ಮಾಲೆ' ಯಲ್ಲಿ ಪ್ರಕಟವಾಗುವವು.

ಕೆಲವು ಪ್ರಕಟಣೆಗಳು 32, 40, 48 ಅಥವಾ ಹೆಚ್ಚು ಪುಟಗಳಿರುವವು. ಆದರೆ, ಯಾವ ಪ್ರಕಟಣೆಯೂ ಹದಿನಾರು ಪುಟಗಳಿಗಿಂತ ಕಡಿಮೆ ಇರುವುದಿಲ್ಲ.

ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು—೧.

# ಟಿಶ್ಯೂ ಔಷಧಗಳ ಕೈಪಿಡಿ

## ಪ್ರಸ್ತಾವನೆ.

ಜರ್ಮನಿಯ ಪ್ರಸಿದ್ಧ ಡಾಕ್ಟರರಾಗಿದ್ದ ಶುಸ್ಲರರಿಂದ ಈ ಚಿಕಿತ್ಸಾ ಕ್ರಮವು 1827ರಲ್ಲಿ ಕಂಡುಹಿಡಿಯಲ್ಪಟ್ಟಿತು. ಮಾನವದೇಹದಲ್ಲಿ ತಲೆದೋರುವ ಸಕಲ ರೋಗಗಳಿಗೆ ಅಂಗಾಂಶಗಳ ಸಂಯೋಜನೆಯಲ್ಲಿ ಅಡಕವಾಗಿರುವ ಕೆಲವು ಲವಣಗಳ ಕೊರತೆಯು ಕಾರಣವಾಗಿದೆ. ಹೀಗೆ ಕೊರತೆಯಾಗಿರುವ ಲವಣಗಳನ್ನು ದೇಹಕ್ಕೆ ಪೂರೈಸಿದರೆ ರೋಗ ನಿವಾರಣೆಯಾಗುತ್ತದೆ ಎಂಬುದು ಟಿಶ್ಯೂ ಔಷಧಶಾಸ್ತ್ರದ ಮುಖ್ಯತತ್ವವಾಗಿದೆ. ಈ ಚಿಕಿತ್ಸಾಕ್ರಮವನ್ನು ಜೀವರಸಾಯನ ವೈದ್ಯಶಾಸ್ತ್ರವೆಂದು ಕರೆಯುತ್ತಾರೆ.

ಜೀವರಸಾಯನ ವೈದ್ಯಶಾಸ್ತ್ರದಲ್ಲಿ ಕೇವಲ ಹನ್ನೆರಡು ಲವಣಗಳು ಉಪಯೋಗಿಸಲ್ಪಡುತ್ತವೆ. ಅವುಗಳು ಯಾವುವೆಂದರೆ, 1. ಕಲ್ಕೇರಿಯ ಫ್ಲೌರ್; 2. ಕಲ್ಕೇರಿಯ ಫೊಸ್; 3. ಕಲ್ಕೇರಿಯ ಸಲ್ಫ್; 4. ಫೆರಮ್ ಫೊಸ್; 5. ಕಾಲಿ ಮ್ಯೂರ್; 6. ಕಾಲಿ ಫೊಸ್; 7. ಕಾಲಿ ಸಲ್ಫ್; 8. ಮೆಗ್ನೀಸಿಯ ಫೊಸ್; 9. ನೆಟ್ರಮ್ ಮ್ಯೂರ್; 10. ನೆಟ್ರಮ್ ಫೊಸ್; 11. ನೆಟ್ರಮ್ ಸಲ್ಫ್; 12. ಸಿಲೀಶಿಯ.

**ಪ್ರಯೋಜನಗಳು:** ಈ ಚಿಕಿತ್ಸಾಕ್ರಮವು ಬಹಳ ಸುಲಭವಾಗಿರುವುದರಿಂದ ಸಾಮಾನ್ಯರು ಕೂಡ ಅಭ್ಯಾಸಿಸಬಹುದು. ಅಲ್ಲದೆ ಹನ್ನೆರಡು ಲವಣಗಳ ಸಹಾಯದಿಂದ ಎಲ್ಲಾ ರೋಗಗಳನ್ನು ಗುಣಪಡಿಸಬಹುದು.

**ಔಷಧವನ್ನು ಚುನಾಯಿಸುವುದು:** ರೋಗದ ಲಕ್ಷಣಗಳನ್ನು ಚೆನ್ನಾಗಿ ಪರೀಕ್ಷಿಸಿ ಔಷಧವನ್ನು ಚುನಾಯಿಸಬೇಕು. ಕೆಲವು ವೇಳೆ ಒಂದಕ್ಕಿಂತ ಹೆಚ್ಚು ಲವಣಗಳು ಅಗತ್ಯವಾಗಿ ತೋರಬಹುದು. ಅಂತಹ ಸಂದರ್ಭಗಳಲ್ಲಿ ಅವುಗಳನ್ನು ಒಂದರ ನಂತರ ಒಂದರಂತೆ ಬದಲಿಸಿ ಬದಲಿಸಿ ಕೊಡಬಹುದು.

**ಔಷಧಗಳ ಪ್ರಕಾರ:** ಟಿಶ್ಯೂ ಔಷಧಗಳನ್ನು ಚೂರ್ಣ (ಹುಡಿ) ಅಥವಾ ಮಾತ್ರೆಗಳ ರೂಪದಲ್ಲಿ ತಯಾರಿಸುತ್ತಾರೆ. ಮಾತ್ರೆಗಳು ಉಪ

ಯೋಗಿಸುವುದಕ್ಕೆ ಅನುಕೂಲವಾಗಿವೆ. ಟಿಶ್ಯೂ ಔಷಧಗಳ ಹೆಸರುಗಳ ನಂತರ 3x, 6x, 12x, 200x ಇತ್ಯಾದಿ ಸಂಖ್ಯೆಗಳನ್ನು ಉಪಯೋಗಿಸುತ್ತಾರೆ. ಈ ಸಂಖ್ಯೆಗಳು ಅವುಗಳ ಸತ್ವವನ್ನು ಸೂಚಿಸುತ್ತವೆ. 3x ಮತ್ತು 6x ಸತ್ವದ ಔಷಧಗಳನ್ನು ಸಾಧಾರಣ ಕಾಯಿಲೆಗಳಿಗೆ ಉಪಯೋಗಿಸಬೇಕು. ದೀರ್ಘಕಾಲದ ರೋಗಗಳಿಗೆ 12x, 30x, ಅಥವಾ 200x ಸತ್ವದ ಔಷಧಗಳು ಫಲಕಾರಿಯಾಗುತ್ತವೆ.

**ಔಷಧದ ಪ್ರಮಾಣ:** ಶಿಶುಗಳಿಗೆ ½—1 ಗ್ರೇನು;* ಮಕ್ಕಳಿಗೆ 1ರಿಂದ 3 ಗ್ರೇನಿನ ವರೆಗೆ; ದೊಡ್ಡವರಿಗೆ 5 ಗ್ರೇನು.

**ಔಷಧದ ಪ್ರಮಾಣದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಅಪಾಯವಿಲ್ಲ.**

**ಸೇವಿಸುವ ವಿಧಾನ:** ಚೂರ್ಣವನ್ನು ಅಥವಾ ಮಾತ್ರೆಯನ್ನು ಹಾಗೆಯೇ ಬಾಯಿಯಲ್ಲಿ ಹಾಕಿಕೊಂಡು ಸೇವಿಸಬಹುದು. ಇಲ್ಲವಾದರೆ ಅದನ್ನು ಸ್ವಲ್ಪ ಬಿಸಿನೀರಿನಲ್ಲಿ ಕರಗಿಸಿ ಸೇವಿಸಬಹುದು. ರೋಗವು ತೀವ್ರವಾಗಿರುವ ಸಮಯದಲ್ಲಿ ಔಷಧವನ್ನು ಪ್ರತಿ 15 ಮಿನಿಟಿಗೊಮ್ಮೆ ಕೊಡಬೇಕು. ರೋಗವು ಶಮನವಾಗುತ್ತ ಬಂದಂತೆ ಔಷಧವನ್ನು ಪುನರಾವರ್ತಿಸುವ ಸಮಯವನ್ನು ಹೆಚ್ಚಿಸಬೇಕು. ರೋಗವು ಸಾಧಾರಣವಾಗಿದ್ದರೆ ಔಷಧವನ್ನು ಎರಡು ಗಂಟೆಗಳಿಗೊಮ್ಮೆ ಕೊಡಬೇಕು.

# ಔಷಧ ಚಿಕಿತ್ಸಾ ಸೂಚಕ

## ಜ್ವರಗಳು.

ಸಾಮಾನ್ಯ ಜ್ವರ (Simple Fever) **ಫೆರಮ್ ಫೊಸ್:** 3x–6x ಎಲ್ಲಾ ವಿಧದ ಜ್ವರಗಳಿಗೆ ಇದು ಆರಂಭದಲ್ಲಿ ಕೊಡಬಹುದಾದ ಮುಖ್ಯ ಔಷಧವಾಗಿದೆ. ನಾಡಿ ಬಡಿತದ ವೇಗವು ಹೆಚ್ಚಾಗುವುದು, ಮೈ ಬಿಸಿ ಏರುವುದು, ಚಳಿ ಮೊದಲಾದ ಲಕ್ಷಣಗಳು ತಲೆದೋರುವಾಗ ಇದನ್ನು ಕೊಡಬೇಕು. ಬೀಗು, ನೆಗಡಿ, ವಾತ ಸಂಬಂಧವಾದ ಜ್ವರಗಳಿಗೆ ಫೆರಮ್‌ಫೊಸನ್ನು ಇತರ ಔಷಧದೊಡನೆ ಬದಲಿಸಿ ಬದಲಿಸಿ ಕೊಡಬೇಕು.

---

*1 ಗ್ರೇನ್=½ ಮಂಜೂಟಿ ತೂಕ.

**ಕಾಲಿ ಮ್ಯೂರ್: 3x–6x;** ಎಲ್ಲಾ ವಿಧದ ಜ್ವರಗಳಿಗೆ ಫೆರಮ್ ಫೊಸಿನ ನಂತರ ಕೊಡುವ ಔಷಧವಾಗಿದೆ. ನಾಲಗೆಯ ಮೇಲೆ ಬಿಳಿ ಬಣ್ಣದ ದಪ್ಪವಾದ ಅಗ್ರ, ಅಥವಾ ಮಲಬದ್ಧತೆ ಇದ್ದರೆ ಈ ಔಷಧವನ್ನು ಕೊಡಬೇಕು.

ಕಾಲಿಫೊಸ್: 6x, 12x—ನರಗಳ ಸಂಬಂಧವಾದ ಜ್ವರಕ್ಕೆ ಇದು ಉತ್ತಮವಾದ ಔಷಧವಾಗಿದೆ. ಅಕ್ರಮವಾದ ನಾಡಿಬಡಿತ ಮತ್ತು ನಿತ್ರಾಣ ಇದ್ದರೆ ಇದನ್ನು ಕೊಡಬೇಕು. ಫೆರಮ್ ಫೊಸಿನೊಡನೆ ಬದಲಿಸಿ ಬದಲಿಸಿ ಕೊಡಬೇಕು.

ಕಾಲಿ ಸಲ್ಫ: 6x, 12x–ಸಂಜೆಹೊತ್ತಿನಲ್ಲಿ ಜ್ವರವೇರುವುದು. ಫೆರಮ್ ಫೊಸ್ ಕೊಟ್ಟದ್ದರಿಂದ ಮೈಬೆವರದೆ ಇದ್ದರೆ ಇದನ್ನು ಕೊಡಬೇಕು. ರಕ್ತವು ವಿಷಕರವಾಗಿ ಉಂಟಾಗುವ ಜ್ವರಗಳಿಗೆ ಕೂಡ ಇದನ್ನು ಕೊಡಬೇಕು.

ನೆಟ್ರಮ್ ಮ್ಯೂರ್: 3x, 30x,--ಕಣ್ಣು ಮೂಗುಗಳಿಂದ ನೀರು ಸುರಿಯುತಿದ್ದು, ಜ್ವರವಿದ್ದರೆ ಈ ಔಷಧವನ್ನು ಫೆರಮ್ ಫೊಸ್‌ನೊಡನೆ ಬದಲಿಸಿ ಬದಲಿಸಿ ಕೊಡಬೇಕು.

ಶೀತಜ್ವರ (Influenza): ಶೀತಜ್ವರವು ಒಂದು ಅಂಟುರೋಗವಾಗಿದೆ. ಆರಂಭವಾಗುವಾಗ, ಕೆಮ್ಮು, ನೆಗಡಿ, ಸೀನುವುದು, ತಲೆನೋವು, ಜ್ವರ, ಮೈಬೇನೆ ಮೊದಲಾದ ಲಕ್ಷಣಗಳು ತಲೆದೋರುತ್ತವೆ.

ಫೆರಮ್ ಫೊಸ್ 3x-6x: ಆರಂಭದಲ್ಲಿ ಈ ಔಷಧವನ್ನು ಕೊಡಬೇಕು.

ನೆಟ್ರಮ್ ಸಲ್ಫ 6x--12x: ಇದು ಶೀತಜ್ವರಕ್ಕೆ ಮುಖ್ಯವಾದ ಔಷಧವಾಗಿದೆ. ಮೂತ್ರದ ಪರಿಮಾಣವನ್ನು ಹೆಚ್ಚಿಸಿ ಶರೀರದ ಜೀವಕಣಗಳಲ್ಲಿ ಹೆಚ್ಚಾದ ದ್ರವವನ್ನು ಕಡಿಮೆಮಾಡುತ್ತದೆ.

ಕಲ್ಕೇರಿಯ ಫೊಸ್: (3x) ಮತ್ತು ಕಾಲಿಫೊಸ್ (6x)--ಜ್ವರವು ಬಿಟ್ಟಮೇಲೆ ಉಳಿಯುವ ನಿಃಶಕ್ತಿಗೆ. ಈ ಎರಡು ಔಷಧಗಳನ್ನು ಬದಲಿಸಿ ಬದಲಿಸಿ ಕೊಡಬೇಕು.

**ಚಳಿಜ್ವರ (Ague)**

**ನೆಟ್ರಮ್ ಸಲ್ಫ 3x–6x:** ಬಿಟ್ಟು ಬಿಟ್ಟು ಬರುವ ಚಳಿಜ್ವರಕ್ಕೆ

ಇದು ಉತ್ತಮವಾದ ಔಷಧವಾಗಿದೆ. ಎರಡು ದಿನಗಳಿಗೊಮ್ಮೆ ಬರುವ ಜ್ವರಕ್ಕೆ ಇದನ್ನು ಕೊಡಬೇಕು.

ಫೆರಮ್ ಫೊಸ್ 3x, 6x: ಜ್ವರ ಮತ್ತು ಜೀರ್ಣವಾಗದ ಆಹಾರ ವಾಂತಿಯಾದರೆ.

ಕಾಲಿ ಫೊಸ್ 3x, 6x: ಬಹಳ ನಿತ್ರಾಣ, ಬೆವರು ಇದ್ದರೆ ಇದನ್ನು ಕೊಡಬೇಕು.

ಕಾಲಿ ಮ್ಯೂರ್ 3x--6x: ನಾಲಗೆಯ ಮೇಲೆ ಬಿಳಿಬಣ್ಣದ ಅಗ್ರ ಅಥವಾ ಬೂದುಮಿಶ್ರಿತ ಬಿಳಿಬಣ್ಣದ ಅಗ್ರವಿದ್ದರೆ, ಸಮುದ್ರದ ಕರಾವಳಿಯಲ್ಲಿ ವಾಸಮಾಡಿದುದರ ಪರಿಣಾಮವಾಗಿ ಜ್ವರ ಉಂಟಾಗಿದ್ದರೆ.

ನೆಟ್ರಮ್ ಮ್ಯೂರ್ 3x—30x: ಬಹಳ ಬಾಯಾರಿಕೆ; ಅತಿಯಾಗಿ ಕ್ವಿಯಿನವನ್ನು ಸೇವಿಸಿದುದರ ದುಷ್ಪರಿಣಾಮಗಳು; ತಾಳಲಾರದಷ್ಟು ತಲೆನೋವು, ಬೆವರಿದ ನಂತರ ಸ್ವಲ್ಪ ಶಮನವಾಗುವುದು. ಇವುಗಳಿಗೆ ಇದು ಉತ್ತಮವಾದ ಔಷಧವಾಗಿದೆ.

ನೆಟ್ರಮ್ ಸಲ್ಫ 3x–6x: ಪಿತ್ತವಿಕಾರದಿಂದ ಉಂಟಾಗುವ ಜ್ವರಕ್ಕೆ.

**ಕೋರ** (Measles): ಫೆರಮ್ ಫೊಸ್ 3x–6x ಇದು ಈ ರೋಗಕ್ಕೆ ಮುಖ್ಯವಾದ ಔಷಧವಾಗಿದೆ. ಬೊಕ್ಕೆಗಳು ಸರಿಯಾಗಿ ಮೂಡುವ ವರೆಗೆ ಅಥವಾ ಕೆಮ್ಮು ಬಹಳ ತೊಂದರೆ ಕೊಡುತಿದ್ದರೆ ಇದನ್ನು ಪ್ರತಿ ಎರಡು ಗಂಟೆಗಳಿಗೊಂದು ಸರ್ತಿ ಕೊಡಬೇಕು.

ಕಾಲಿ ಮ್ಯೂರ್ 3x-6x: ಫೆರಮ್ ಫೊಸಿನ ನಂತರ ಅಥವಾ ಫೆರಮ್ ಫೊಸಿನೊಡನೆ ಬದಲಿಸಿ ಕೊಡಬಹುದು. ನಾಲಗೆಯ ಮೇಲೆ ಬಿಳಿ ಅಗ್ರ, ಕೆಮ್ಮು ಮತ್ತು ಕಿವಿ ಸರಿಯಾಗಿ ಕೇಳದಿದ್ದರೆ ಇದು ಉತ್ತಮವಾದ ಔಷಧವಾಗಿದೆ.

ಕೆಲ್ಕೇರಿಯ ಫೊಸ್ 3x: ರೋಗವು ಗುಣವಾದ ನಂತರ ಈ ಔಷಧವನ್ನು ದಿನಕ್ಕೊಂದು ಸರ್ತಿಯಂತೆ ರೋಗಿಯು ಆರೋಗ್ಯವನ್ನು ಪುನಹ ಹೊಂದುವ ವರೆಗೆ ಕೊಡಬೇಕು.

ಕೋಟಲೆ (Chicken-pox): ಫೆರಮ್ ಫೊಸ್ (3x-6x) ಮತ್ತು ಕಾಲಿಮ್ಯೂರ್ (3x, 6x) ಈ ಎರಡು ಔಷಧಗಳನ್ನು ಒಂದರ ನಂತರ ಒಂದರಂತೆ ಕೊಟ್ಟರೆ ಈ ರೋಗವು ಗುಣವಾಗುತ್ತದೆ.

ಸಿಡುಬು (Small-pox): ಕಾಲಿಮ್ಯೂರ್ (3x). ಸಿಡುಬು ರೋಗಕ್ಕೆ ಇದು ಮುಖ್ಯ ಔಷಧವಾಗಿದೆ. ಅದು ಬೊಕ್ಕೆಗಳು ಸರಿಯಾಗಿ ಮೂಡುವಂತೆ ಮಾಡುತ್ತದೆ.

ಕಾಲಿ-ಸಲ್ಫ್ 3x-6x: ಹಕ್ಕಳೆಗಳು ಉದುರಿ, ಹೊಸ ಚರ್ಮವು ಚೆನ್ನಾಗಿ ಉಂಟಾಗುವಂತೆ ಮಾಡುತ್ತದೆ.

## ಜೀರ್ಣಾಂಗಗಳ ರೋಗಗಳು

ಅಜೀರ್ಣ (Indigestion): ಫೆರಮ್ ಫೊಸ್ 6x, 12x—ವಾಂತಿ, ಉಂಟುಮಾಡಿದ ನಂತರ ಹೊಟ್ಟೆನೋವು; ಹೊಟ್ಟೆಯಲ್ಲಿ ವಾಯು ತುಂಬಿಕೊಳ್ಳುವುದು; ಬಾಯಿ ರುಚಿ ಇಲ್ಲದಿರುವುದು; ಹಾಲು ಒಗ್ಗದಿರುವುದು; ಬಿಗಿಯಾದ ಬಟ್ಟೆಗಳನ್ನು ಧರಿಸಲಿಕ್ಕಾದಿರುವುದು; ಈ ಲಕ್ಷಣಗಳಿದ್ದರೆ ಫೆರಮ್ ಫೊಸ್ ಉತ್ತಮವಾದ ಔಷಧವಾಗಿದೆ.

ಕಾಲಿಮ್ಯೂರ್ 3x-6x: ನಾಲಗೆಯ ಮೇಲೆ ಅಗ್ರ; ಕೊಬ್ಬುಯುಕ್ತವಾದ ಆಹಾರವನ್ನು ಸೇವಿಸಿದ್ದರ ಪರಿಣಾಮವಾಗಿ ಅಕ್ರಮ ಉಂಟಾಗಿದ್ದರೆ; ಬಾಯಿ ಕಹಿಯಾಗಿದ್ದರೆ; ಪಿತ್ತಜನಕಾಂಗದ ಕಾರ್ಯವು ಮಂದವಾಗಿ ಬಲ ಹೆಗಲಿನ ಬುಡದಲ್ಲಿ ನೋವಿದ್ದರೆ; ಕಾಲಿಮ್ಯೂರನ್ನು ಕೊಡಬೇಕು.

ಕಾಲಿ ಫೊಸ್ 6x-12x: ಊಟಮಾಡಿದ ಮರುಕ್ಷಣ ಹಸಿವೆಯಾಗುವುದು; ಹೊಟ್ಟೆಯು ಬರಿದಾದಂತೆ ತೋರುವುದು; ಹೊಟ್ಟೆಯ ಎಡ ಪಾರ್ಶ್ವದಲ್ಲಿ ಬೇನೆ; ನರಗಳ ನಿಶಕ್ತಿ; ಈ ಅಕ್ರಮಗಳಿಗೆ ಇದು ಒಳ್ಳೆಯ ಔಷಧ.

ಕಾಲಿಸಲ್ಫ್ 6x, 12x: ನಾಲಗೆಯ ಮೇಲೆ ಹಳದಿ ಬಣ್ಣದ ಅಗ್ರ; ಹೊಟ್ಟೆಯು ತುಂಬಿಕೊಂಡಿದ್ದಂತೆ ತೋರುವುದು; ಹೊಟ್ಟೆನೋಯುವುದು; ಬಾಯಲ್ಲಿ ನೀರುರುವುದು; ಇವೇ ಮೊದಲಾದ ಲಕ್ಷಣಗಳಿದ್ದರೆ ಇದನ್ನು ಕೊಡಬೇಕು.

ಮೆಗ್ನೀಸಿಯ ಫೊಸ್ 1x,-6x: ಹೊಟ್ಟೆಯು ಬಿಗಿದಂತಾಗುವುದು; ಹೊಟ್ಟೆಯಲ್ಲಿ ಕಿವಿದಂತೆ ನೋವಾಗುವುದು; ಉಂಡನಂತರ ಆಹಾರವು ಬಾಯಿಗೆ ಮರುಕಳಿಸುವುದು. ಮೆಗ್ನೀಸಿಯ ಫೊಸನ್ನು ಸ್ವಲ್ಪ ಬಿಸಿನೀರಿನೊಡನೆ ಸೇವಿಸಿದರೆ ಉತ್ತಮ.

ನೆಟ್ರಮ್ ಮ್ಯೂರ್ 6x-30x: ಹೊಟ್ಟೆನೋವು; ಬಾಯಲ್ಲಿ ನೀರೂರುವುದು; ಬಾಯಿವಾಸನೆ; ಮಲಬದ್ಧತೆ; ಬಾಯಾರಿಕೆ, ಈ ಲಕ್ಷಣಗಳಿದ್ದರೆ ನೆಟ್ರಮ್ ಮ್ಯೂರನ್ನು ಕೊಡಬೇಕು.

ನೆಟ್ರಮ ಫೊಸ್ 6x-12x: ಜಠರದ ಹುಳಿ; ಹುಳಿ ತೇಗು; ನಾಲಗೆಯ ಮೇಲೆ ಕೆನೆಯಂತಿರುವ ಅರಸಿನ ಬಣ್ಣದ ಅಗ್ರ; ಹುಳದ ಉಪದ್ರವದಿಂದಾಗಿ ತಲೆದೋರುವ ಜಠರದ ಅಕ್ರಮಗಳು. ಎದೆಯುರಿ, ಬಾಯಿ ಕಹಿಯಾಗಿರುವುದು, ಮೊದಲಾದ ಲಕ್ಷಣಗಳಿದ್ದರೆ ನೆಟ್ರಮ್ ಫೊಸನ್ನು ಕೊಡಬೇಕು.

ನೆಟ್ರಮ್ ಸಲ್ಫ 6x-12x: ಪಿತ್ತವಿಕಾರ; ಬಾಯಿ ಕಹಿಯಾಗುವುದು; ಪಿತ್ತದ ಅತಿಸ್ರಾವ; ಕಹಿಯಾಗಿರುವ ದ್ರವ ವಾಂತಿಯಾಗುವುದು. ನಾಲಗೆಯ ಮೇಲೆ ಹಸುರುಮಿಶ್ರಿತ ಕಂದು ಅಥವಾ ಹಸುರುಮಿಶ್ರಿತ ಬೂದು ಬಣ್ಣದ ಅಗ್ರ; ಕಡು ಪಿತ್ತವರ್ಣದ ಮಲ; ಪಿತ್ತಜನಕಾಂಗದ ಪ್ರದೇಶದಲ್ಲಿ ಬೇನೆ; ಬೆಳಗ್ಗೆ ಏಳುವಾಗ ಬಾಯಿ ಕಹಿಯಾಗಿರುವುದು; ತಲೆನೋವು, ತಲೆತಿರುಗುವುದು ಮತ್ತು ಆಲಸ್ಯ; ಇವೇ ಮೊದಲಾದ ಲಕ್ಷಣಗಳಿರುವಲ್ಲಿ ಈ ಔಷಧವನ್ನು ಕೊಡಬೇಕು.

ಕಲ್ಕೇರಿಯ ಫೊಸ್ 6x-30x: ಅಜೀರ್ಣದಲ್ಲಿ ಇದನ್ನು ಇತರ ಎಲ್ಲಾ ಔಷಧಗಳೊಡನೆ ಬದಲಿಸಿ ಬದಲಿಸಿ ಕೊಡಬೇಕು. ಅನೇಕ ವೇಳೆ ಆಹಾರವು ಸರಿಯಾಗಿ ರಕ್ತಗತವಾಗದಿರುವುದು ಅಜೀರ್ಣಕ್ಕೆ ಕಾರಣವಾಗಿದೆ. ಹೊಟ್ಟೆಯಲ್ಲಿ ವಾಯು ತುಂಬಿಕೊಳ್ಳುವುದಕ್ಕೆ ಇದು ಉತ್ತಮವಾದ ಔಷಧವಾಗಿದೆ. ಇದರ 1x ಸತ್ವದ ಹುಡಿಯನ್ನು ನೀರಿನಲ್ಲಿ ಕರಗಿಸಿ, ಊಟದನಂತರ ಅರ್ಧತಾಸುಬಿಟ್ಟು ತೆಗೆದುಕೊಂಡರೆ ಆಹಾರವು ಸರಿಯಾಗಿ ರಕ್ತಗತವಾಗುವುದು.

ಮಲಬದ್ಧತೆ (Constipation): ಫೆರಮ್ ಫೊಸ್ 3x-6x

ರಕ್ತವಿಹೀನರ ಮತ್ತು ಮೂಲವ್ಯಾಧಿಯಿರುವವರ ಮಲಬದ್ಧತೆಗೆ ಇದು ಉತ್ತಮ ಔಷಧವಾಗಿದೆ.

ಕಾಲಿ–ಮ್ಯೂರ್ 3x, 6x ನಾಲಿಗೆಯ ಮೇಲೆ ಬಿಳಿಬಣ್ಣದ ಅಥವಾ-ಬೂದುಮಿಶ್ರಿತ ಬಿಳಿಬಣ್ಣದ ಅಗ್ರವಿದ್ದರೆ.

ಕಾಲಿ ಫೊಸ್, 3x-12x: ಮಲನಾಳವು ಜಡವಾಗಿದ್ದು, ಕಡು ಕಂದುಬಣ್ಣದ ಮಲವು ವಿಸರ್ಜಿಸಲ್ಪಟ್ಟರೆ.

ನೆಟ್ರಮ್ ಮ್ಯೂರ್ 3x-30x: ವಿಸರ್ಜಿಸಲು ಕಷ್ಟವಾದ, ಗಟ್ಟಿಯಾದ ಒಣಮಲ. ಮಲವಿಸರ್ಜಿಸಿದ ನಂತರ ಮಲದ್ವಾರವು ಹರಿದು ಹೋದಂತೆ ಆಗುವುದು; ಜೊಲ್ಲು ಅತಿರೇಕವಾಗಿ ಸ್ರವಿಸಲ್ಪಡುವುದು; ಕೃತಕ ಆಹಾರವನ್ನು ಸೇವಿಸುವ ಶಿಶುಗಳ ಮಲಬದ್ಧತೆ; ಇವುಗಳಲ್ಲಿ ನೆಟ್ರಮ್ ಮ್ಯೂರ್ ಫಲಕಾರಿಯಾಗಿದೆ.

**ಅತಿಸಾರ** (Diarrhoea): ಫೆರಮ್ ಫೊಸ್ 3x-6x. ಪ್ರಥಮದಲ್ಲಿ ಕೊಡಬೇಕಾದ ಔಷಧ. ಆಗಿಂದಾಗ ನೀರಾದ, ಜೀರ್ಣವಾಗದಿರುವ ಮಲ ಹೋಗುವುದು; ಹೊಟ್ಟೆನೋವು ಬಾಯಾರಿಕೆ ಮತ್ತು ಸ್ವಲ್ಪ ಜ್ವರ.

ಮೆಗ್ನೀಸಿಯ ಫೊಸ್ 3x-6x: ಹೊಟ್ಟೆನೋವು ತೀವ್ರವಾಗಿದ್ದರೆ.

ಕಾಲಿ ಮ್ಯೂರ್ 3x–6x: ಮಲದಲ್ಲಿ ನೆತ್ತರು ಅಥವಾ ಹೆಚ್ಚು ಆಮವಿದ್ದರೆ, ನಾಲಗೆಯ ಮೇಲೆ ಬಿಳಿಬಣ್ಣದ ಅಗ್ರವಿದ್ದರೆ.

**ಸೂಚನೆ:**—ಯೋಗ್ಯವಾದ ಔಷಧವನ್ನು ಪ್ರತಿ ಮಲವಿಸರ್ಜನೆಯ ನಂತರ ಒಂದು ಸರ್ತಿ ಕೊಡಬೇಕು.

ದೀರ್ಘಕಾಲದ ಅತಿಸಾರಕ್ಕೆ ಕಲ್ಕೇರಿಯ ಫೊಸ್ (6x) ಮತ್ತು ನೆಟ್ರಮ್ ಸಲ್ಫ್ (6x)ಗಳನ್ನು ಪ್ರತಿ ವಿಸರ್ಜನೆಯ ನಂತರ ಒಂದು ಸರ್ತಿಯಂತೆ ಬದಲಿಸಿ ಬದಲಿಸಿ ಕೊಡಬೇಕು.

**ಆಮಶಂಕೆ** (Dysentery): ಕಾಲಿ ಮೂರ್ (6x) ಮತ್ತು ಫೆರಮ್ ಫೊಸ್ (3x) ಪ್ರತಿ ಎರಡು ತಾಸುಗಳಿಗೊಂದು ಸರ್ತಿಯಂತೆ ಬದಲಿಸಿ ಬದಲಿಸಿ ಕೊಟ್ಟರೆ ಸಾಮಾನ್ಯ ತರದ ಆಮಶಂಕೆಯು ಗುಣವಾಗುತ್ತದೆ. ಕಾಲಿಫೊಸ್ 6x, 12x, ಮಲದಲ್ಲಿ ಹೆಚ್ಚು ರಕ್ತವಿದ್ದು ಮತ್ತು ದುರ್ವಾಸನೆ ಇದ್ದರೆ.

**ಜಠರದಲ್ಲಿ ಅಥವಾ ಕರುಳಿನಲ್ಲಿ ವಾಯು ತುಂಬಿಕೊಳ್ಳುವುದು** (Flatulency): ಮೆಗ್ನೀಸಿಯಾ ಫೊಸ್ (3x) ಮತ್ತು ಕಲ್ಕೇರಿಯ ಫೊಸ್ (6x) ಇವೆರಡು ಮುಖ್ಯ ಔಷಧಗಳಾಗಿವೆ. ಮೆಗ್ನೀಸಿಯ ಫೊಸನ್ನು ಊಟದ ನಂತರ ಪ್ರತಿ ಅರ್ಧ ಗಂಟೆಗೊಂದು ಸರ್ತಿಯಂತೆ, ಗುಣದೊರೆಯುವ ವರೆಗೆ ಕೊಡಬೇಕು. ಕಲ್ಕೇರಿಯ ಫೊಸನ್ನು ಬೆಳಗ್ಗೆ ಮತ್ತು ರಾತ್ರೆ ಕೊಡಬೇಕು.

**ಬಿಕ್ಕಳಿಕೆ:** (Hiccup): ಮೆಗ್ನೀಸಿಯ ಫೊಸ್ 3x,

**ಮೂಲವ್ಯಾಧಿ** (Piles): ಫೆರಮ್ ಫೊಸ್ 3x, 6x. ನೋವು ಮತ್ತು ರಕ್ತಸ್ರಾವವಿರುವ ಮೂಲವ್ಯಾಧಿಗೆ, ಗುಳ್ಳೆಗಳು ಗಟ್ಟಿಯಾಗುವು ದಕ್ಕಿಂತ ಮುಂಚಿತವಾಗಿ ಕೊಡಬೇಕಾದ ಔಷಧವಾಗಿದೆ. ಪ್ರತಿ ಅರ್ಧ ಗಂಟೆಗೊಂದು ಸರ್ತಿಯಂತೆ ಕೊಡಬೇಕು.

ಕಲ್ಕೇರಿಯ ಫ್ಲೋರ್: 3x-12x. ಶಾಶ್ವತವಾದ ಗುಣ ದೊರೆಯು ವಂತೆ ಮಾಡುವ ಮುಖ್ಯ ಔಷಧವಾಗಿದೆ. ರಕ್ತಸ್ರಾವವಿಲ್ಲದಿರುವ ಮೂಲ ವ್ಯಾಧಿಗೆ ಇದು ಹೆಚ್ಚು ಗುಣಕಾರಿಯಾಗಿದೆ.

ಮೆಗ್ನೀಸಿಯ ಫೊಸ್: 3x-6x; ಮಲಾಶಯದ ಗುಳ್ಳೆಗಳು ಬಹಳ ನೋವನ್ನುಂಟುಮಾಡುತ್ತಿದ್ದರೆ.

**ವಾಂತಿ** (Vomiting): ಸಿಲೀಶಿಯ 6x, 30x; ಮಕ್ಕಳು ಮೊಲೆ ಯುಂಡ ಕೂಡಲೆ ವಾಂತಿಮಾಡುವುದಕ್ಕೆ; ಬೆಳಗ್ಗೆ ವಾಂತಿ ಮತ್ತು ಚಳಿ ಇದ್ದರೆ.

ಫೆರಮ್ ಫೊಸ್: 3x-6x; ಸೇವಿಸಿದ ಆಹಾರವು ಜೀರ್ಣವಾಗದೆ ಕೂಡಲೆ ವಾಂತಿಯಾಗುವುದು; ಕಡುಗೆಂಪು ಬಣ್ಣದ ರಕ್ತವಾಂತಿ ಯಾಗುವುದು.

ಕಾಲಿಮ್ಯೂರ್: 3x-6x; ದಪ್ಪವಾದ ಬಿಳಿಬಣ್ಣದ ಕಫ ವಾಂತಿ ಯಾಗುವುದು. ನಾಲಗೆಯ ಮೇಲೆ ಬಿಳಿ ಬಣ್ಣದ ಅಗ್ರ.

ನೆಟ್ರಮ್ ಮ್ಯೂರ್: 6x, 30x; ಹುಳಿಯಾದ ದ್ರವ (ಆಹಾರ ವಲ್ಲ) ವಾಂತಿಯಾದರೆ; ಮೊಸರಿನಂತಿರುವ ಮುದ್ದೆ ವಾಂತಿಯಾದರೆ; ಹುರಿದ ಕಾಫಿಯಂತಿರುವ ಕಪ್ಪಾದ ವಸ್ತು ವಾಂತಿಯಾದರೆ; ಬಣ್ಣರಹಿತ ವಾದ ನಾರಿನಂತಹ ಕಫ ವಾಂತಿಯಾದರೆ.

ನೆಟ್ರುವರ್ ಫೊಸ್: 3x, 6x; ಹುಳಿ ರಸ ಮತ್ತು ಮೊಸರಿನಂತಿರುವ ಪದಾರ್ಥ ವಾಂತಿಯಾಗುವುದು; ಅಲ್ಲದೆ ನಾಲಗೆಯ ಮೇಲೆ ಹಿಂಬದಿಯಲ್ಲಿ ಹಳದಿ ಬಣ್ಣದ ಅಗ್ರ.

ನೆಟ್ರುವರ್ ಸಲ್ಫ್ 6x;—ಪಿತ್ತವಾಂತಿಯಾದರೆ ಮತ್ತು ಬಾಯಿ ಕಹಿಯಾಗಿದ್ದರೆ.

ಕಲ್ಕೇರಿಯ ಫೊಸ್: 3x, 6x; ತಣ್ಣೀರು ಕುಡಿದರೆ ಅಥವಾ ಐಸ್-ಕ್ರೀಮ್ ತಿಂದರೆ ಕೂಡಲೆ ವಾಂತಿಯಾಗುವುದು; ಶಿಶುಗಳು ಮೇಲಿಂದ ಮೇಲೆ ವಾಂತಿಮಾಡುವುದು ಮತ್ತು ಆಗಿಂದಾಗ ಆಹಾರಕ್ಕಾಗಿ ಅಳುತ್ತಿರುವುದು. ಮಕ್ಕಳಿಗೆ ಹಲ್ಲು ಮೂಡುವಾಗ ಆಗುವ ವಾಂತಿಗೆ.

**ಬಾಯಿ ಹುಣ್ಣು** (Sore-mouth): ಕಾಲಿ ಮ್ಯೂರ್ (6x); ಮತ್ತು ನೆಟ್ರುವರ್ ಫೊಸ್ (3x); ಈ ಎರಡು ಔಷಧಗಳನ್ನು ಒಂದರ ನಂತರ ಒಂದರಂ ಬದಲಿಸಿ ಬದಲಿಸಿ ಕೊಡತಕ್ಕದು.

**ಹಲ್ಲು ನೋವು:** (Toothache) **ಫೆರಮ ಫೊಸ್** 6x: ವಸಡುಗಳು ಕೆಂಪಾಗಿ, ಬಿಗು ಮತ್ತು ನೋವು ಇದ್ದರೆ, ಅಲ್ಲದೆ ನೋವು ತಂಪಾದ ಪಾನೀಯಗಳನ್ನು ಕುಡಿದರೆ ಶಮನವಾಗುವುದಾದರೆ.

ನೆಟ್ರುವರ್ ಮ್ಯೂರ್--6x: ನೋವಿನಿಂದಾಗಿ ಬಾಯಲ್ಲಿ ಅತಿರೇಕವಾಗಿ ಜೊಲ್ಲು ಸುರಿದರೆ ಅಥವಾ ಕಣ್ಣೀರು ಹರಿದರೆ.

ಮೆಗ್ನೀಷಿಯ ಫೊಸ್ 3x: ಶಾಕಕೊಡುವುದರಿಂದ ಅಥವಾ ಬಿಸಿಯಾಗಿರುವ ಪಾನೀಯಗಳನ್ನು ಕುಡಿಯುವುದರಿಂದ ನೋವು ಶಮನವಾಗುವುದಾದರೆ.

ಸಿಲೀಶಿಯ 3x, 30x: ಹಲ್ಲಿನ ಬುಡದಲ್ಲಿ ಏಳುವ ಗುಳ್ಳೆಯ ನೋವಿಗೆ.

ಕಲ್ಕೇರಿಯ ಫ್ಲೋರ್ 6x: ವಸುಡು ಹುಣ್ಣು ಅಥವಾ ಇತರ ಗಟ್ಟಿಯಾಗಿರುವ ಬೀಗುವಿಕೆಗೆ.

## ಉಸಿರಾಟದ ಅಂಗಗಳ ರೋಗಗಳು

**ನೆಗಡಿ:** (Common cold—Catarrh)

ಕಾಲಿ ಮ್ಯೂರ್ 3x, 6x: ಮೂಗು ಒಣಗಿರುವುದು. ಗಂಟಲಿನ ಹಿಂಬದಿಯಿಂದ ಕಫವನ್ನು ಕೇಕರಿಸಿ, ಕಂಠ ಶುದ್ಧಿ ಮಾಡುವುದು. ನೆಗ

ಡಿಯ ಆರಂಭದಲ್ಲಿ ಕೊಡಲು ಯೋಗ್ಯವಾದ ಔಷಧವಾಗಿದೆ. ಪ್ರತಿ ಮೂರು ಗಂಟೆಗಳಿಗೊಂದು ಸರ್ತಿಯಂತೆ ಕೊಡಬೇಕು.

ಕಲ್ಕೇರಿಯ ಫೋಸ್, 3x, 6x: ಧೀರ್ಘಕಾಲದ ನೆಗಡಿಗೆ ಉತ್ತಮವಾದ ಔಷಧವಾಗಿದೆ. ಸುಲಭವಾಗಿ ನೆಗಡಿ ಉಂಟಾಗುವ ಪ್ರಕೃತಿ. ಇದನ್ನು ಇತರ ಔಷಧಗಳೊಡನೆ ಸರ್ತಿಯ ಪ್ರಕಾರ ತೆಗೆದುಕೊಳ್ಳಬಹುದು.

ನೆಟ್ರಮ್ ಮ್ಯೂರ್ 3x, 30x: ಮೂಗಿನಿಂದ ನೀರಿನಂತಿರುವ ತೆಳ್ಳಗಾದ ಸಿಂಬಳವು ಹರಿದರೆ ಇದು ಉತ್ತಮವಾದ ಔಷಧವಾಗಿದೆ. ವಾಸನೆ ಮತ್ತು ರುಚಿ ತಿಳಿಯದಿರುವುದು. ಬೆನ್ನು ಮತ್ತು ತಲೆನೋವುಗಳಿಂದ ಹೆಚ್ಚು ಬಳಲುತ್ತಿರುವ ರಕ್ತ ವಿಹೀನರ ದೀರ್ಘಕಾಲದ ನೆಗಡಿಗೆ ಈ ಔಷಧವನ್ನು ಕೊಡಬೇಕು.

ಕಾಲಿ ಸಲ್ಫ 6x-12x: ಮೂಗಿನಿಂದ ಬರುವ ಸಿಂಬಳವು ಹಳದಿ ವರ್ಣವುಳ್ಳದ್ದಾಗಿದ್ದು, ಲೋಳೆಯಂತಿದ್ದರೆ ಇದು ಉತ್ತಮವಾದ ಔಷಧವಾಗಿದೆ.

ನೆಟ್ರಮ್ ಸಲ್ಫ 6x-12x: ಮೂಗಿನಿಂದ ಹಸರು ವರ್ಣದ ಸಿಂಬಳ ಧಾರಾಳವಾಗಿ ಹರಿದರೆ.

ಸಿಲೀಶಿಯ 12x-6x: ಥಕ್ಕನೆ ಗುಣವಾಗದಿರುವ ನೆಗಡಿಗೆ ಇದು ಉತ್ತಮವಾದ ಔಷಧವಾಗಿದೆ. ಸಿಂಬಳಕ್ಕೆ ದುರ್ವಾಸನೆಯಿದ್ದರೆ, ಮೂಗು ಒಣಗಿ ನೋವನ್ನುಂಟುಮಾಡಿದರೆ, ಮೂಗು ಕಟ್ಟಿಕೊಂಡಿದ್ದರೆ, ಅಥವಾ ಮೂಗಿನ ಒಳಪೊರೆಯಲ್ಲಿ ವ್ರಣಗಳಿದ್ದರೆ ಇದನ್ನು ಕೊಡಬೇಕು.

**ಸ್ವರಭಂಗ: (Hoarseness)**

ಫೆರಮ ಫೋಸ್ (6x) ಮತ್ತು ಕಾಲಿ ಮ್ಯೂರ್ (3x) ಈ ಎರಡು ಔಷಧಗಳನ್ನು ಸರ್ತಿಯ ಪ್ರಕಾರ ಪ್ರತಿ ತಾಸಿಗೊಮ್ಮೆ ಕೊಡಬೇಕು. ಗುಣವಾಗದಿದ್ದರೆ ಕಲ್ಕೇರಿಯ ಸಲ್ಫನ್ನು (6x) ಕೊಡಬೇಕು.

**ಖಾಸಶ್ವಾಸ: (Bronchitis)**

ಫೆರಮ್ ಫೋಸ್-6x: 24 ಗಂಟೆಗಳ ವರೆಗೆ ಈ ಔಷಧವನ್ನು ಕೊಡಬೇಕು. ಅಷ್ಟರಲ್ಲಿ ಕೆಮ್ಮುವಾಗ ಕಫ ಬರಲು ಪ್ರಾರಂಭವಾಗಿ ಜ್ವರವು ಕಡಿಮೆಯಾದರೆ ಕಾಲಿ ಮ್ಯೂರ್ (6x)ನ್ನು ಫೆರಮ್ ಫೋಸಿನೊಡನೆ ಬದಲಿಸಿ ಕೊಡಬೇಕು. ಸಾಮಾನ್ಯವಾಗಿ ಈ ಎರಡು ಔಷಧಗಳು

ಸಾಕಾಗುತ್ತವೆ. ಆದರೆ ಕಫವು ಧಾರಾಳವಾಗಿ ಬಂದು ಮತ್ತೂ ಎದೆಯಲ್ಲಿ ಕಫ ತುಂಬಿಕೊಂಡಿರುವಂತೆ ಶಬ್ಧವಾಗುತ್ತಿದ್ದರೆ ಕಾಲಿ ಮ್ಯೂರಿನ ಬದಲು ಕಾಲಿ ಸಲ್ಫ್‌ನ್ನು ಕೊಡಬೇಕು. ದೀರ್ಘಕಾಲದ ಕಾಯಿಲೆಗೆ ಕಾಲಿ ಸಲ್ಫ್, ಕಲ್ಕೇರಿಯ ಫೋಸ್ ಮತ್ತು ಸಿಲೀಶಿಯ ಮುಖ್ಯ ಔಷಧಗಳಾಗಿವೆ. ಒಂದು ಔಷಧವನ್ನು ಒಂದು ವಾರದ ವರೆಗೆ ಕೊಡಬೇಕು. ಅಷ್ಟರಲ್ಲಿ ಗುಣ ತೋರದಿದ್ದರೆ ನಂತರ ಇನ್ನೊಂದು ಔಷಧವನ್ನು ಕೊಡಬೇಕು. ಒಂದು ವಾರದಲ್ಲಿ ಸ್ವಲ್ಪ ಗುಣತೋರಿದರೆ ಅದೇ ಔಷಧದ ಹೆಚ್ಚಿನ ಸತ್ವದ ಚೂರ್ಣವನ್ನು ಉಪಯೋಗಿಸಿ ಚಿಕಿತ್ಸೆಯನ್ನು ಮುಂದುವರಿಸಬೇಕು.

ಕೆಮ್ಮು (Cough) ಫೆರಮ್‌ಫೊಸ್-6x: ನೆಗಡಿಯನಂತರ ಉಂಟಾಗುವ ಕಿರಿದಾದ ಒಣಕೆಮ್ಮು, ಎದೆನೋವು, ಜ್ವರ ಇವುಗಳಿಗೆ ಈ ಔಷಧವನ್ನು ಉಸಿರಾಟದ ಅಂಗಗಳ ಎಲ್ಲಾ ರೋಗಗಳ ಆರಂಭದಲ್ಲಿ ಕೊಡಬಹುದು.

ಕಾಲಿ ಮ್ಯೂರ್ (6x-12x): ಹೊಟ್ಟೆಯಿಂದ ಹುಟುವ ದೊಡ್ಡ ಸ್ವರದ ಗಟ್ಟಿಯಾದ ಕೆಮ್ಮು; ದಪ್ಪವಾದ ಮತ್ತು ಬಿಳಿ ವರ್ಣದ ಕಫ; ಜಠರದ ಅಕ್ರಮಗಳಿಂದ ಉಂಟಾಗುವ ಕೆಮ್ಮು; ನಾಲಗೆಯ ಮೇಲೆ ಬಿಳಿ ಬಣ್ಣದ ಅಗ್ರ.

ಕಾಲಿ ಸಲ್ಫ್ 6x-12x: ಹಳದಿ ವರ್ಣದ ಕಫ, ಎದೆಯಲ್ಲಿ ಕಫವು ತುಂಬಿಕೊಂಡಂತೆ ಶಬ್ಧವಾಗುವುದು; ಬೆಚ್ಚಗಿರುವ ಕೋಣೆಯಲ್ಲಿ ಕೆಮ್ಮು ಹೆಚ್ಚಾಗುವುದು.

ಮೆಗ್ನೀಸಿಯ ಫೊಸ್ (3x-6x): ಕೆಮ್ಮು ಬರುವಾಗ ಉಸಿರು ಕಟ್ಟಿದಂತಾಗುವುದು; ನಾಯಿ ಕೆಮ್ಮು; ರಾತ್ರೆಯಲ್ಲಿ ಹೆಚ್ಚಾಗುವುದು. ನರಗಳ ನಿಶಕ್ತಿಯಿರುವವರ ಒಣಕೆಮ್ಮು.

ಕಲ್ಕೇರಿಯ ಫೊಸ್: 3x, 6x, 30x-ತತ್ತಿಯ ಬಿಳಿ ಪದಾರ್ಥದಂತಿರುವ ಕಫ ಹೋಗುವ ಕೆಮ್ಮು, ರಾತ್ರೆಯಲ್ಲಿ ಮೈ ಬೆವರುವುದು. ಕೆಮ್ಮುವಾಗ ಉಸಿರು ಕಟ್ಟಿದಂತಾಗುವುದು, ಮಲಗಿಕೊಂಡರೆ ಶಮನವಾಗುವುದು. ದೀರ್ಘ ಕಾಲದ ಕೆಮ್ಮು. ಕ್ಷಯ ರೋಗಿಗಳ ಕೆಮ್ಮು.

ನೆಟ್ರಮ್ ಸಲ್ಫ್ 6x-12x: ಕೆಮ್ಮು, ಎದೆಯು ಬರಿದಾದಂತೆ ತೋರುವುದು. ಕಫದೊಡನೆ ಕೀವು ಇರುವುದು. ಎದೆ ನೋವನ್ನು

ಮತ್ತು ನಿತ್ರಾಣವನ್ನು ಶಮನಮಾಡಲು ಎದೆಯನ್ನು ಒತ್ತಿ ಹಿಡಿಯಬೇಕು, ಕೆಮ್ಮುವಾಗ ನಾರಿನಂತಿರುವ ಹಳದಿ ಮಿಶ್ರಿತ ಹಸುರು ಬಣ್ಣದ ಕಫ ಹೋಗುವುದು.

**ನಾಯಿಕೆಮ್ಮು** (Whooping Cough) ಮೆಗ್ನೀಸಿಯಾಫೊಸ್ 3x-6x: ಮುಖ್ಯವಾದ ಔಷಧವಾಗಿದೆ.

ಕಲ್ಕೇರಿಯಫೊಸ್ (3x-6x): ನಿತ್ರಾಣಿಗಳಿಗೆ ಅಥವಾ ಮಕ್ಕಳಿಗೆ ಹಲ್ಲು ಮೂಡುವ ಸಮಯದಲ್ಲಿ ಈ ಔಷಧವು ಉಪಯೋಗಕ್ಕೆ ಬೀಳುತ್ತದೆ. ಮೆಗ್ನೀಸಿಯಾಫೊಸಿನಿಂದ ಗುಣದೊರೆಯದಿದ್ದಲ್ಲಿ ಇದನ್ನು ಕೊಡಬೇಕು. ಘಕ್ಕನೆ ಗುಣವಾಗದಿರುವ ನಾಯಿ ಕೆಮ್ಮಿಗೆ ಇದು ಉತ್ತಮವಾದ ಔಷಧ ವಾಗಿದೆ.

ಕಾಲಿಮ್ಯೂರ್ 3x-6x: ಉಸಿರುಗಟ್ಟಿಸುವ ಕೆಮ್ಮು, ಮಲಬದ್ಧತೆ, ನಾಲಗೆಯ ಮೇಲೆ ಬಿಳಿ ವರ್ಣದ ಅಗ್ರ ಇದ್ದರೆ, ಕಾಲಿಮ್ಯೂರನ್ನು ಕೊಡ ಬೇಕು.

ಕಾಲಿಫೊಸ್ 3x-12x: ಬಹಳ ನಿತ್ರಾಣ ಮತ್ತು ಸುಸ್ತು ಇದ್ದರೆ ಇತರ ಔಷಧಗಳೊಡನೆ ದಿನಕ್ಕೆ ಒಂದೆರಡು ಸರ್ತಿ ಕೊಡಬಹುದು.

ಫೆರಮ್‌ಫೊಸ್ 3x-6x: ಮೂಗಿನಿಂದ ಅಥವಾ ಬಾಯಿಯಿಂದ ರಕ್ತವು ಹರಿದರೆ ಮತ್ತು ಜ್ವರವಿದ್ದರೆ.

**ಉಬ್ಬಸ** (Asthama)

ಕಲ್ಕೇರಿಯ ಫೊಸ್ (3x): ಶ್ವಾಸನಾಳಗಳ ಉಬ್ಬಸಕ್ಕೆ. ಸ್ವಚ್ಛ ವಾದ ಮತ್ತು ನಾರಿನಂತಹ ಕಫ.

ಕಾಲಿಫೊಸ್ 3x-6x: ಅತ್ಯಂತ ಉಪಯುಕ್ತವಾದ ಔಷಧ. ಹೆಚ್ಚಿನ ಪರಿಮಾಣದಲ್ಲಿ ಮತ್ತು ಮೇಲಿಂದ ಮೇಲೆ ಕೊಡಬೇಕು. ಸ್ವಲ್ಪ ಆಹಾರ ಸೇವಿಸಿದರೂ ಉಬ್ಬಸವುಂಟಾಗುವುದು. ನರಗಳ ನಿಃಶಕ್ತಿಯಿಂದ ಉಂಟಾಗುವ ಉಬ್ಬಸ.

ಕಾಲಿಮ್ಯೂರ್ 3x-6x: ಜಠರದ ಆಕ್ರಮಗಳು, ಎದೆಯು ಬಿಗಿ ದಂತಾಗುವುದು; ನಾಲಗೆಯ ಮೇಲೆ ಬಿಳಿಬಣ್ಣದ ಅಗ್ರ; ಬಿಳಿಬಣ್ಣದ ಅಂಟುವ ಕಫ.

ನೆಟ್ರಮ್ ಮ್ಯೂರ್ 3x, 6x: ಸ್ವಚ್ಛವಾದ, ನೊರೆಯಿಂದ ಕೂಡಿದ, ಕಫ, ಕಣ್ಣಿನಿಂದ ಮತ್ತು ಮೂಗಿನಿಂದ ನೀರು ಸುರಿಯುವುದು. ಕಾಲಿ ಫೊಸಿನೊಡನೆ ಬದಲಿಸಿ ಕೊಡಬಹುದು.

ನೆಟ್ರಮ್ ಸಲ್ಫ 6x–200x: ಬೆಳಗ್ಗಿನ ಹೊತ್ತು ಉಬ್ಬಸ ಹೆಚ್ಚು; ತೇವಭರಿತವಾದ ಹವೆಯಿರುವಾಗ ಅಥವಾ ಒದ್ದೆಯಾಗಿರುವ ಸ್ಥಳದಲ್ಲಿದ್ದರೆ ಹೆಚ್ಚು; ಹಸುರು ಬಣ್ಣದ ಕಫ ವಿಶೇಷವಾಗಿ ಹೋಗುವುದು. ಚಿಕ್ಕ ಮಕ್ಕಳ ಉಬ್ಬಸಕ್ಕೆ ಉತ್ತಮವಾದ ಔಷಧ.

ಉಬ್ಬಸವನ್ನು ನಿರ್ಮೂಲವಮಾಡಲು ನೆಟ್ರಮ್ ಸಲ್ಫ (12x)ನ್ನು ರಾತ್ರಿ ಮತ್ತು ಬೆಳಿಗ್ಗೆ, ಕೆಲವು ದಿವಸಗಳ ವರೆಗೆ ಕೊಡಬೇಕು. ನಂತರ ಕೆಲ್ಕೇರಿಯ ಫೊಸ್ (3x)ನ್ನು ಅದೇ ರೀತಿಯಲ್ಲಿ ಕೊಡಬೇಕು.

## ಚರ್ಮರೋಗಗಳು

**ಸರ್ಪಸುತ್ತು** (Erysipeles): ಫೆರಮ್ ಫೊಸ್ (3x-6x) ಮತ್ತು ಕಾಲಿಮ್ಯೂರ್ (3x-6x) ಮುಖ್ಯವಾದ ಔಷಧಗಳು. ಪ್ರತಿ ಗಂಟೆಗೊಂದು ಸರ್ತಿಯಂತೆ ಬದಲಿಸಿಕೊಡಬೇಕು. ಗುಳ್ಳೆಗಳು ಮೂಡಿದರೆ ಕಾಲಿಸಲ್ಫ (12x).

### ತಲೆನೋವು (Headache)

ಫೆರಮ್ ಫೊಸ್ (6x) ತಲೆತಿರುಗುವುದು, ಭಾರವಾಗಿರುವುದು, ಬಗ್ಗುವಾಗ ಸಿಡಿಯುವುದು, ಕಂಠದ ರಕ್ತನಾಳಗಳು ಬಡಿಯುವುದು ತೋರುವುದು, ತಲೆನೋವು ಹೆಚ್ಚಾದಂತೆ ವಾಂತಿಯಾಗುವುದು; ತಲೆಯನ್ನು ಅಲ್ಲಾಡಿಸಿದರೆ ನೋವು ಹೆಚ್ಚಾಗುವುದು; ತಲೆಗೆ ರಕ್ತವೇರಿ ಕಣ್ಣು ಮೋರೆಯೂ ಕೆಂಪಾಗಿದ್ದರೆ.

ಕಾಲಿಫೊಸ್ 3x-12x: ನರಗಳ ದುರ್ಬಲತೆಯಿಂದ ಉಂಟಾಗುವ ತಲೆನೋವು, ಅತಿಯಾಗಿ ಶ್ರಮಿಸಿದ್ದರಿಂದ ಉಂಟಾಗುವ ತಲೆನೋವು; ತಲೆನೋವು ಇರುವಾಗ ರೋಗಿಯು ಕಂಗೆಟ್ಟಿರುವುದು, ಶಬ್ದ ಸಹಿಸಲಿಕ್ಕಾಗದಿರುವುದು, ಫಕ್ಕನೆ ಉದ್ರೇಕಗೊಳ್ಳುವುದು.

ನೆಟ್ರಮ್ ಸಲ್ಫ (6x-3x): ಪಿತ್ತದ ಉಪದ್ರವದಿಂದ ತಲೆನೋವು.

ನೆಟ್ರವರ್ ಫೊಸ್ 3x-6x:  ನಾಲಗೆಯು ಮೇಲೆ ಹಳದಿಬಣ್ಣದ ಅಗ್ರ, ಜಠರದ ಹುಳಿಯಿಂದಾಗಿ ತಲೆನೋವು.

ಮೆಗ್ನೀಸಿಯ ಫೊಸ್ 3x-6x:  ತಲೆಯಲ್ಲಿ ಚುಚ್ಚುವ ಮತ್ತು ಚಿವಿಯುವ ನೋವು, ಶಾಕದಿಂದ ಶಮನವಾಗುವುದು, ತಂಪಿನಿಂದ ಹೆಚ್ಚಾಗುವುದು.

## ಹೆಂಗಸರ ಮುಟ್ಟಿನ ಅಕ್ರಮಗಳು

ಫೆರಮ್ ಫೊಸ್ 3x-6x:  ಮುಟ್ಟಾಗುವಾಗ ಬಹಳ ನೋವಿದ್ದರೆ, ಮುಖವು ಕೆಂಪೇರುವುದು, ಪ್ರಕಾಶಮಾನವಾದ ಕೆಂಪುಬಣ್ಣದ ರಕ್ತಸ್ರಾವ, ಕೂಡಲೆ ಗಟ್ಟಿಯಾಗುವುದು, ಜೀರ್ಣವಾಗದಿರುವ ಆಹಾರ ವಾಂತಿಯಾಗುವು.

ಕಾಲಿಫೊಸ್ 6x-12x:  ಕ್ರಮವಾಗಿ ಮುಟ್ಟಾಗದಿರುವುದು, ತೀವ್ರವಾದ ಉದರಶೂಲೆ; ನರಗಳ ನಿಶ್ಶಕ್ತಿ, ಕಪ್ಪುವರ್ಣದ ರಕ್ತ.  ಅಳುವ ಪ್ರಕೃತಿಯು, ನಿತ್ರಾಣಿಗಳಾಗಿರುವ, ಬೇಗನೆ ಉದ್ರೇಕಗೊಳ್ಳುವ ಸ್ತ್ರೀಯರಿಗೆ ಉತ್ತಮವಾಗಿದೆ.

ನೆಟ್ರಮ್ ಮ್ಯೂರ್ 3x-30x: ತೆಳ್ಳಗಾದ, ನೀರಿನಂತಿರುವ ಸ್ರಾವ, ನಿತ್ರಾಣಿಗಳಾದ, ತೂಕಡಿಸುವ, ಖಿನ್ನರಾಗಿರುವ, ತಲೆನೋವು ಆಗಿಂದಾಗ ಉಂಟಾಗುತ್ತಿರುವ ಮತ್ತು ಸುಖನಿದ್ರೆ ಇಲ್ಲದಿರುವವರಿಗೆ ಉತ್ತಮ.

ಮೆಗ್ನೀಸಿಯ ಫೊಸ್ 3x-6x:  ಉದರ ಶೂಲೆ, ಸ್ರಾವಕ್ಕಿಂತ ಮೊದಲು ಬೇನೆ, ಕಡುವರ್ಣದ ಸ್ರಾವ.

ಕೆಲ್ಕೇರಿಯ ಫ್ಲೌರ್ 3x-6x:  ಪ್ರಸವವೇದನೆಯಂತಹ ನೋವು ಅತಿ ಸ್ರಾವ.

ಕಾಲಿ ಸಲ್ಫ: 12x-3x:  ಬಹಳ ತಡವಾಗಿ ಮುಟ್ಟಾಗುವುದು. ಅತ್ಯಂತ ಅಲ್ಪಸ್ರಾವ, ಕಿಬ್ಬೊಟ್ಟೆ ಉಬ್ಬಿದಂತಿರುವುದು; ನಾಲಗೆಯು ಹಳದಿಬಣ್ಣದ ಅಗ್ರ.

ಸಿಲೀಶಿಯ 3x-6x:  ಪಾದಗಳು ಬೆವರುವುದು; ಇಡಿ ಮೈ ತಣ್ಣಗಾದಂತೆ ತೋರುವುದು, ಸ್ರಾವಕ್ಕೆ ಹೆಚ್ಚು ವಾಸನೆ; ಮಲಬದ್ಧತೆ.

ನೆಟ್ರಮ್ ಫೊಸ್ 3x-6x:  ಹುಳಿ ವಾಸನೆಯ ಸ್ರಾವ; ಮಧ್ಯಾಹ್ನದ ನಂತರ [illegible] ನೋವು; ಕಾಲಿನ ಗಂಟನಲ್ಲಿ ನೋವು.

# ಮಕ್ಕಳ ರೋಗಗಳು

**ಹೊಟ್ಟೆ ಹುಳುವಿನ ಉಪದ್ರವ:** (Worms) ನೆಟ್ರಮು ಫೊಸ್ (3x) ಎಲ್ಲಾ ವಿಧದ ಹೊಟ್ಟೆ ಹುಳಗಳ ಉಪದ್ರವಕ್ಕೆ. ಹೊಟ್ಟೆ ನೋವು, ಮೂಗು ತೀಡುವುದು, ಸುಖ ನಿದ್ರೆ ಇಲ್ಲದಿರುವುದು, ಮಲದ್ವಾರ ತುರಿಸುವುದು, ಹಲ್ಲುಕಡಿಯುವುದು, ಹುಳಿ ತೇಗು, ಇವುಗಳು ಮುಖ್ಯ ಲಕ್ಷಣಗಳಾಗಿವೆ. ಔಷಧವನ್ನು ರಾತ್ರೆ ಮತ್ತು ಬೆಳಿಗ್ಗೆ ಕೊಡಬೇಕು.

**ಹಲ್ಲು ಮೂಡುವುದು** (Dentition):

ಫೆರಮ್ ಫೊಸ್: 6x,12x; ಜ್ವರ, ವಸುಡು ಬೀಗು, ಮುಖಕೆಂಪು.

ಮೆಗ್ನೀಸಿಯ ಫೊಸ್: 3x-6x; ಬಾಲಗ್ರಹ, ಒಣ, ಉಸಿರುಗಟ್ಟಿಸುವ ಕೆಮ್ಮು.

ಕಲ್ಕೇರಿಯ ಫೊಸ್: 12x-30x; ಹಲ್ಲು ತಡವಾಗಿ ಮೂಡುವುದು, ಸರಿಯಾಗಿ ಮೂಡದಿರುವುದು; ನೆತ್ತಿಯರಂಧ್ರವು ಕೂಡದಿರುವುದು, ತಕ್ಕ ಪ್ರಾಯದಲ್ಲಿ ನಡೆಯಲು ಅಶಕ್ತರಾದರೆ.

ನೆಟ್ರಮು ಫೊಸ್: 6x; ಅತಿಸಾರ, ಹುಳಿ ವಾಸನೆಯುಳ್ಳ ಮತ್ತು ಹಸುರುಬಣ್ಣದ ಮಲ.

**ಮಕ್ಕಳು ಅಳುವುದು:** ಕಾರಣವೇನೆಂದು ಪರೀಕ್ಷಿಸಿ ಔಷಧವನ್ನು ಕೊಡಬೇಕು. ಸಾಮಾನ್ಯವಾಗಿ ಕಲ್ಕೇರಿಯ ಫೊಸ್ (3x); ನಂತರ ಮೆಗ್ನೀಸಿಯ ಫೊ (3x) ಕೊಟ್ಟರೆ ಸಾಕಾಗುತ್ತದೆ.

**ಮಕ್ಕಳ ನೆಗಡಿ:** ಫೆರಮು ಫೊಸ್ (6x) ಮತ್ತು ನೆಟ್ರಮ್ ಮ್ಯೂರ್ (6x); ಈ ಎರಡು ಔಷಧಗಳನ್ನು ಒಂದರ ನಂತರ ಒಂದರಂತೆ ಬದಲಿಸಿ ಪ್ರತಿ ಗಂಟೆಗೊಂದು ಸರ್ತಿ ಕೊಡಬೇಕು. ಗುಣ ಕಂಡನಂತರ ಸ್ವಲ್ಪ ಹೆಚ್ಚು ಸಮಯ ಬಿಟ್ಟುಕೊಡಬೇಕು.

**ಮಲಬದ್ಧತೆ** (Constipation): ನೆಟ್ರಮ್ ಫೊಸ್, 3x; ಒಂದೊಂದು ಸರ್ತಿ ಅತಿಸಾರವುಂಟಾಗಿ ಮಲಬದ್ಧತೆಯಾಗುವುದು. ಹೆಚ್ಚಿನ ಪರಿಮಾಣದಲ್ಲಿ (5 ಗ್ರೇನು) ಈ ಔಷಧವನ್ನು ಕೊಟ್ಟರೆ ಚೆನ್ನಾಗಿ ಮಲವಿಸರ್ಜನೆಯಾಗುತ್ತದೆ.

ಸಿಲೀಶಿಯ: 6x, 30x; **ಸರಿಯಾದ ಪೋಷಣೆ ಇಲ್ಲದಿರುವ ಮಕ್ಕಳ ಮಲಬದ್ಧತೆಗೆ.**

ವಾಂತಿ ಮತ್ತು ಭೇದಿ (Cholera Infatum): ಕಲ್ಕೇರಿಯಾ ಫೊಸ್ 3x; ಮುಖ್ಯ ಔಷಧ. ಹಸುರು ವರ್ಣದ ಮಲ; ಬಲಹೀನತೆಯನ್ನುಂಟುಮಾಡಿದರೆ; ಫೆರಮ ಫೊಸ್ (6x); ಜ್ವರವಿದ್ದರೆ ಕಲ್ಕೇರಿಯಾ ಫೊಸಿನೊಡನೆ ಬದಲಿಸಿ ಕೊಡಬಹುದು. ನೆಟ್ರಮ್ ಫೊಸ್ 6x. ಹುಳಿ ವಾಸನೆಯುಳ್ಳ ವಾಂತಿ ಮತ್ತು ಮಲ; ಹಸುರುಬಣ್ಣದ ಮಲ.

ಬಾಲಗ್ರಹ (Spasms): ಮೆಗ್ನೇಸಿಯ ಫೊಸ್ 6x; ಇದನ್ನು ಬಿಸಿನೀರಿನಲ್ಲಿ ಕರಗಿಸಿ ಹದಿನೈದು ನಿಮಿಷಗಳಿಗೊಂದು ಸರ್ತಿಯಂತೆ ಕೆಲವು ಸರ್ತಿ ಕೊಡಬೇಕು. ಗುಣದೊರೆಯದಿದ್ದರೆ ಕಲ್ಕೇರಿಯ ಫೊಸ್(3x)ನ್ನು ಕೊಡಬೇಕು.

ಗ್ರಹಣಿ (Rickets): ಈ ರೋಗವಿರುವ ಮಕ್ಕಳಿಗೆ ಜಾಗರೂಕತೆಯಿಂದ ಚಿಕಿತ್ಸೆಮಾಡತಕ್ಕದ್ದು. ಸಕ್ಕರೆ ಮತ್ತು ಅನ್ನವನ್ನು ಕಡಿಮೆ ಮಾಡಬೇಕು. ದನದ ಹಾಲನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಡಬೇಕು. ಮಗುವನ್ನು ಬೆಳಗ್ಗಿನ ಬಿಸಿಲಿನಲ್ಲಿ ಅಡ್ಡಾಡಲು ಬಿಡಬೇಕು.

ಕಲ್ಕೇರಿಯ ಫೊಸ್: 3x–6x: ಮುಖ್ಯವಾದ ಔಷಧವಾಗಿದೆ. ಎಲುಬುಗಳು ಮೃದುವಾಗಿರುವುದು; ಮಗು ಕೃಶವಾಗಿರುವುದು, ಅತಿರೇಕ ಬೆವರುವುದು, ನಿತ್ರಾಣ ಮತ್ತು ಮೈ ತಣ್ಣಗಿರುವುದು, ಅತಿಸಾರ, ಕಲ್ಕೇರಿಯ ಫೊಸನ್ನು ಆಹಾರದೊಂದಿಗೆ ಮಿಶ್ರಮಾಡಿ ಆಗಿಂದಾಗ ಕೊಡಬೇಕು. ಚಿಕಿತ್ಸೆಯು 2x ಸತ್ವದ ಔಷಧದಲ್ಲಿ ಪ್ರಾರಂಭಿಸಬೇಕು. ನಂತರ 3x ಮತ್ತು 6x ಸತ್ವದ ಔಷಧವನ್ನು ದಿನಕ್ಕೆ ಮೂರು ಸರ್ತಿ ಕೊಡಬೇಕು. ಇತರ ಔಷಧಗಳೊಡನೆ ಕೊಡಬಹುದು.

ನೆಟ್ರಮ್ ಮ್ಯೂರ್ 3x, 6x: ಕುತ್ತಿಗೆಯು ಬಹಳ ಸಪೂರವಾಗಿದ್ದರೆ, ಮತ್ತು ಬಹಳ ಕೃಶವಾಗಿದ್ದರೆ.

ಸಿಲೀಶಿಯ 3x, 12x: ತಲೆಯು ದೊಡ್ಡದಾಗಿದ್ದು ಶರೀರದ ಇತರ ಅವಯವಗಳು ಕೃಶವಾಗಿರುವುದು, ಹೊಟ್ಟೆಯು ಉಬ್ಬಿಕೊಂಡಿರುವುದು, ಕಾಲಗಂಟುಗಳಿಗೆ ಬಲವಿಲ್ಲದಿರುವುದು, ದುರ್ವಾಸನೆಯುಳ್ಳ ಅತಿಸಾರ.

ನೆಟ್ರಮ್ ಫೊಸ್, 3x, 6x: ಸರಿಯಾದ ಪೋಷಣೆಯಿಲ್ಲದಿರುವ ಮಕ್ಕಳಿಗೆ, ಸುವಾಸನೆಯ ಮಲ, ಬೆವರು. ಮಣ್ಣುಬಣ್ಣದ ಮಲ.



## ಒಂದಾಣೆ ಮಾಲೆ ಎಲ್ಲರಿಗಾಗಿ ಇದೆ

### ಒಂದಾಣೆ ಮಾಲೆಯಲ್ಲಿ
### ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟೆರಾಯ (ವಿನೋದ ಕಥೆ) ಲೇ: ದಿ| ಎಮ್.ಎನ್.ಕಾಮತ್

೨. ನಾರೀಶ್ವರರು (ಏಕಾಂಕ ಪ್ರಹಸನ)

೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು

೪. ಸದ್ರಿಸುಬ್ಬ (ಏಕಾಂಕ ಪ್ರಹಸನ) ಲೇ: ದಿ| ಎಮ್.ಎನ್. ಕಾಮತ್

೫. ಅದ್ಭುತ ತ್ಯಾಗ ಮತ್ತು ಇತರ ಕಥೆಗಳು
ಸಂಗ್ರಾಹಕರು: ವೈದ್ಯಗುರು ಎಮ್. ಆರ್. ಭಟ್

೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)

೭. 'ಬೀಡಿಸೇದಬೇಡಿ' ಮತ್ತು 'ಆ ಮಂಗು' (ವಿನೋದ ಕಥೆಗಳು)

೮. ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತಸಂವಿಧಾನದಲ್ಲಿನ ಕೆಲವು ಇಂಗ್ಲಿಷ್ ಶಬ್ದಗಳಿಗೆ ಸಮಾನಾರ್ಥ ಶಬ್ದಗಳು)

೯. ಲಂಚಕ್ಕೆ ಸಂಚಕಾರ ಮತ್ತು ಇತರ ವಿನೋದ ಕಥಾನಕಗಳು
(ಲೇ: ಡಾ| ಎಸ್. ಪಿ. ಭಟ್.)

೧೦. ಟಿಶ್ಯೂ ಔಷಧಿಗಳ ಕೈಪಿಡಿ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಹತ್ತು ಆಣೆಗಳಿಗೆ, ಹೊದಿಕೆ (ಕವರು) ಕೂಡಿ 236 ಪುಟಗಳನ್ನು 'ಒಂದಾಣೆಮಾಲೆ' ಕೊಟ್ಟದೆ.

ವಾರಕ್ಕೊಂದು ಉತ್ತಮ ಪುಸ್ತಕ.

೧೧ನೇ ಪ್ರಕಟಣೆ: ಶ್ರೀಕ್ಷೇತ್ರ ಧರ್ಮಸ್ಥಳ.

ಒಂದಾಣೆ ಮಾಲೆ,
ಪ್ರಭಾತ ಆಫೀಸು, ರಥಬೀದಿ, ಮಂಗಳೂರು - 1.

**ಎಲ್ಲರಿಗೆ ಬೇಕಾದುದು ಒಂದಾಣೆ ಮಾಲೆಯಲ್ಲಿದೆ.**

Edited, Printed and Published by K. V. Shenoy
at The Prabhat Printers, Ltd., Mangalore-1.